# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 611 |
| ಸದಸ್ಯರ ಹೆಸರು | : | ಶ್ರೀ ಆರ್. ಬಿ. ತಿಮ್ಮಾಪೂರ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 21.02.2022 |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕದಲ್ಲಿ ಗುರುತಿಸಿರುವ ಪದವಿ ಕಾಲೇಜುಗಳನ್ನು ರಾಷ್ಟ್ರೀಯ ಉಚ್ಛತರ್ ಶಿಕ್ಷಾ ಅಭಿಯಾನ (RUSA) ಅಡಿಯಲ್ಲಿ ಮಾದರಿ ಪದವಿ ಕಾಲೇಜುಗಳಾಗಿ ಅಭಿವೃದ್ಧಿಪಡಿಸಲು ಕೈಗೊಂಡಿರುವ ಕ್ರಮಗಳಾವುವು: | ರೂಸಾ 1.0 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಜೇವರ್ಗಿ ಹಾಗೂ ರೂಸಾ 2.0 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ರಾಯಚೂರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಶಹಾಪುರ ಮತ್ತು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸುರಪುರಗಳನ್ನು ಆಯ್ಕೆ ಮಾಡಲಾಗಿದ್ದು, ಭಾರತ ಸರ್ಕಾರದ ಶಿಕ್ಷಣ ಮಂತ್ರಾಲಯವು ಅನುಮೋದನೆ ನೀಡಿರುವ ಸಾಂಸ್ಥಿಕ ಅಭಿವೃದ್ಧಿ ಯೋಜನೆಯಂತೆ ಅಭಿವೃದ್ಧಿಪಡಿಸಲು ಕ್ರಮಕೈಗೊಳ್ಳಲಾಗಿದೆ. |
| ಆ) | ಗುರುತಿಸಲಾದ ಕಾಲೇಜುಗಳಲ್ಲಿ ಯೋಜನೆಯ ಅನುಷ್ಠಾನದ ಸ್ಥಿತಿಯೇನು: | 1. ರೂಸಾ 1.0 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಜೇವರ್ಗಿ ಕಾಲೇಜಿಗೆ ರೂ.4.00 ಕೋಟಿ ಅನುದಾನ ಬಿಡುಗಡೆಯಾಗಿರುತ್ತದೆ. ಇದರಲ್ಲಿ ನೂತನ ಕಟ್ಟಡ ಕಾಮಗಾರಿಗಾಗಿ ರೂ.2,80,62,000/- ಮೊತ್ತದ ಅಂದಾಜುಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಕಾಮಗಾರಿಯು ಪೂರ್ಣಗೊಂಡು ಹಸ್ತಾಂತರವಾಗಿರುತ್ತದೆ. ನೂತನ ಉಪಕರಣಗಳ ಖರೀದಿಗೆ ರೂ.1,19,38,000/-ಗಳನ್ನು ಮೀಸಲಿಡಲಾಗಿದ್ದು, ಟೆಂಡರ್ ಪ್ರಕ್ರಿಯೆ ಬಿಡ್ ಇವ್ಯಾಲ್ಯೂಯೇಷನ್ ಹಂತದಲ್ಲಿರುತ್ತದೆ.<br>2. ರೂಸಾ 2.0 ಯೋಜನೆಯಡಿ ಆಯ್ಕೆಯಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ರಾಯಚೂರು, ಸರ್ಕಾರಿ ಪ್ರಥಮ |

| | | |
|---|---|---|
| | | ದರ್ಜೆ ಕಾಲೇಜು, ಶಹಾಪುರ, ಹಾಗೂ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸುರಪುರ, ಕಾಲೇಜುಗಳಿಗೆ ತಲಾ ರೂ.4.00 ಕೋಟಿ ಮೀಸಲಿಡಲಾಗಿದ್ದು, ತಲಾ ರೂ.2.00 ಕೋಟಿ ಬಿಡುಗಡೆಯಾಗಿದೆ. ನೂತನ ಕಟ್ಟಡ ಕಾಮಗಾರಿಗಾಗಿ ತಲಾ ರೂ.160.00 ಲಕ್ಷಗಳ ಅಂದಾಜುಪಟ್ಟಿಗಳಿಗೆ ಹಾಗೂ ನವೀಕರಣ/ಮೇಲ್ದರ್ಜೆ ಕಾಮಗಾರಿಗಾಗಿ ತಲಾ ರೂ.160.00 ಲಕ್ಷಗಳ ಅಂದಾಜುಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ಅನುದಾನ ಬಿಡುಗಡೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. ಸದರಿ ಕಾಲೇಜುಗಳಿಗೆ ನೂತನ ಉಪಕರಣಗಳ ಖರೀದಿಗೆ ತಲಾ ರೂ.80.00 ಲಕ್ಷಗಳನ್ನು ಮೀಸಲಿಡಲಾಗಿದ್ದು, ಟೆಂಡರ್ ಪ್ರಕ್ರಿಯೆ ಬಿಡ್ ಇವ್ಯಾಲ್ಯೂಯೇಷನ್ ಹಂತದಲ್ಲಿರುತ್ತದೆ. |
| ಇ) | ಇತರ ಕಾಲೇಜುಗಳಿಗೆ ಯೋಜನೆಯನ್ನು ವಿಸ್ತರಿಸಲು ಯಾವುದಾದರೂ ಯೋಜನೆಗಳಿವೆಯೇ: | ಇಲ್ಲ |
| ಈ) | ಹಾಗಿದ್ದಲ್ಲಿ, ಅದರ ವಿವರಗಳು? | |

ಸಂಖ್ಯೆ: ಇಡಿ 2 ಇಜಿಒವಿ 2022

(ಡಾ: ಅಶ್ವಥ್ ನಾರಾಯಣ ಸಿ. ಎನ್)
ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ ಮತ್ತು
ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು
ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ ಸಚಿವರು.